# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| 1 | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 40 (409) |
| 2 | ಸದಸ್ಯರ ಹೆಸರು | ಪ್ರಕಾಶ್.ಕೆ ರಾಥೋಡ್ (ನಾಮನಿರ್ದೇಶನ ಹೊಂದಿದವರು) |
| 3 | ವಿಷಯ | ಲಂಬಾಣಿ ತಾಂಡಗಳನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸುವ ಕುರಿತು |
| 4 | ಉತ್ತರಿಸಬೇಕಾದ ದಿನಾಂಕ | 15-09-2021 |
| 5 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮಂಡ್ಯ ಜಿಲ್ಲೆಯ, ಮಳವಳ್ಳಿ ತಾಲ್ಲೂಕಿನ ಹಲಗೂರು ಹೋಬಳಿ, ಬ್ಯಾಡರಹಳ್ಳಿ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಮಣಿಗಾರನಕಟ್ಟೆ-ಹೊಸದೊಡ್ಡಿ, ಬಸವನಗೌಡದೊಡ್ಡಿ, ದಾಲನಕಟ್ಟೆ ಎಂಬ ಲಂಬಾಣಿ ತಾಂಡಗಳು ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ) | ಬಂದಿದ್ದಲ್ಲಿ, ಈ ಎಲ್ಲಾ ತಾಂಡಗಳು ಮುತ್ತತ್ತಿ, ಕಾಡಿನ ಅಂಚಿನ ಪ್ರದೇಶಗಳಾಗಿದ್ದು, ಈ ಪ್ರದೇಶದಲ್ಲಿ ಲಂಬಾಣಿ ಜನರು ವಾಸವಾಗಿರುವ ದಾಖಲೆಗಳು ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಇ) | ಈ ಪ್ರದೇಶದಲ್ಲಿ ವಾಸಿಸುತ್ತಿರುವ ಲಂಬಾಣಿ ಜನಾಂಗದ ತಾಂಡಗಳನ್ನು ಕಂದಾಯ ಗ್ರಾಮಗಳನ್ನಾಗಿ ಪರಿವರ್ತಿಸಲು ಸರ್ಕಾರ ಕೈಗೊಳ್ಳುವ ಕ್ರಮಗಳೇನು? (ವಿವರ ನೀಡುವುದು) | ಮಂಡ್ಯ ಜಿಲ್ಲೆ, ಮಳವಳ್ಳಿ ತಾಲ್ಲೂಕಿನ ಹಲಗೂರು ಹೋಬಳಿ ಬ್ಯಾಡರಹಳ್ಳಿ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಮಣಿಗಾರನ ಕಟ್ಟೆ-ಹೊಸದೊಡ್ಡಿ, ಬಸವಗೌಡನದೊಡ್ಡಿ, ದಾಲನಕಟ್ಟೆ ಎಂಬ ಲಂಬಾಣಿ ತಾಂಡಗಳಿವೆ.<br><br>ಮಣಿಗಾರನಕಟ್ಟೆ-ಹೊಸದೊಡ್ಡಿ ತಾಂಡಾದ ಜನರು ಬಸವನಬೆಟ್ಟ ಫಾರೆಸ್ಟ್ ಸ.ನಂ. 1 ರ ಅರಣ್ಯ ಭೂಮಿಯಲ್ಲಿ ವಾಸ ಮಾಡುತ್ತಿರುತ್ತಾರೆ. ಹಕ್ಕುಪತ್ರ ನೀಡುವ ಬಗ್ಗೆ ಗ್ರಾಮಪಂಚಾಯ್ತಿ ಮಟ್ಟದ ಅರಣ್ಯ ಹಕ್ಕು ಸಮಿತಿಯ ಸಭೆಯಲ್ಲಿ |

| | | |
|---|---|---|
| | | ಅನುಮೋದನೆಯಾಗಿರುತ್ತದೆ. ಉಪವಿಭಾಗ ಮಟ್ಟದ ಅರಣ್ಯ ಹಕ್ಕು ಸಮಿತಿಯ ಮತ್ತು ಜಿಲ್ಲಾ ಮಟ್ಟದ ಅರಣ್ಯ ಹಕ್ಕು ಸಮಿತಿಯ ಅನುಮೋದನೆ ನಂತರ ಹಕ್ಕುಪತ್ರ ನೀಡಲಾಗುವುದು. ಹಕ್ಕುಪತ್ರ ನೀಡಿದ ನಂತರ, The Scheduled Tribes and other Traditional Forest Dwellers(Recognition of Forest Rights) Act 2006 ಪ್ರಕಾರ ಮಣಿಗಾರನಕಟ್ಟೆ-ಹೊಸದೊಡ್ಡಿ ತಾಂಡವನ್ನು ಹೊಸ ಕಂದಾಯ ಗ್ರಾಮವನ್ನಾಗಿ ಘೋಷಿಸಲು ಕ್ರಮ ಕೈಗೊಳ್ಳಲಾಗುವುದು.<br><br>ದಾಳನಕಟ್ಟೆ ತಾಂಡಾದ ಜನರು ದಾಳನಕಟ್ಟೆ ಗ್ರಾಮದ ಸ.ನಂ. 5ರ ಹಿಡುವಳಿ ಜಮೀನಿನಲ್ಲಿ ವಾಸವಿರುತ್ತಾರೆ. ಸದರಿ ಜನರಿಗೆ ಹಕ್ಕುಪತ್ರ ನೀಡುವ ಸಂಬಂಧ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 38(A) ಮತ್ತು ನಿಯಮ 9(B) ರನ್ವಯ 2E ಅಧಿಸೂಚನೆಯನ್ನು ಹೊರಡಿಸಿ ಖಾಸಗಿ ಜಮೀನನ್ನು ಸರ್ಕಾರಕ್ಕೆ ನಿಹಿತಗೊಳಿಸಿ ಪ್ರಾಥಮಿಕ ಮತ್ತು ಅಂತಿಮ ಅಧಿಸೂಚನೆಯನ್ನು ಹೊರಡಿಸಿ, ಹಕ್ಕುಪತ್ರವನ್ನು ವಿತರಿಸಿ ದಾಳನಕಟ್ಟೆ ಎಂಬ ಹೊಸ ಕಂದಾಯ ಗ್ರಾಮವನ್ನಾಗಿ ಘೋಷಿಸಲು ಕ್ರಮ ಕೈಗೊಳ್ಳಲಾಗುವುದು.<br><br>ಬಸವಗೌಡನದೊಡ್ಡಿ ತಾಂಡಾದ ಜನರು ಬಸವಗೌಡನದೊಡ್ಡಿ ಗ್ರಾಮದ ಸ.ನಂ5 ಮತ್ತು ಸ.ನಂ.10 ರಲ್ಲಿ ಸರ್ಕಾರಿ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಹೆಸರಿನಲ್ಲಿರುವ ಜಮೀನಿನಲ್ಲಿ ವಾಸವಿರುತ್ತಾರೆ..<br>ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 94(D) ಮತ್ತು ನಿಯಮ 108(Z) ರನ್ವಯ ಪ್ರಾಥಮಿಕ ಮತ್ತು ಅಂತಿಮ ಅಧಿಸೂಚನೆಯನ್ನು ಹೊರಡಿಸಿ, ಹಕ್ಕುಪತ್ರವನ್ನು ವಿತರಿಸಿ ಬಸವಗೌಡನದೊಡ್ಡಿ ಎಂಬ ಹೊಸ ಕಂದಾಯ ಗ್ರಾಮವನ್ನಾಗಿ ಘೋಷಿಸಲು ಕ್ರಮ ಕೈಗೊಳ್ಳಲಾಗುವುದು. |

ಕಂಇ 20 ಪಿಎಲ್‌ಸಿ 2021

(ಆರ್. ಅಶೋಕ)
ಕಂದಾಯ ಸಚಿವರು